

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | **674** |
| ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ. ರಾಥೋಡ್<br>(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 22.02.2022 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮರಳು ಬೇಡಿಕೆ ಮತ್ತು ಪೂರೈಕೆಯಲ್ಲಿ ಕೃತಕ ಅಭಾವ ಸೃಷ್ಟಿಸಿ, ಅವ್ಯವಹಾರ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಮರಳು ಕೊರತೆ ನೀಗಿಸಲು ಸರ್ಕಾರವು ಮಲೇಷಿಯಾದಿಂದ ಆಮದು ಮಾಡಿಕೊಂಡಿರುವ ಮರಳಿನ ಪ್ರಮಾಣ ಎಷ್ಟು; | ದಿನಾಂಕ 16.11.2017 ರಂದು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994ಕ್ಕೆ ತಿದ್ದುಪಡಿ ತಂದು (ತಿದ್ದುಪಡಿ) ನಿಯಮಗಳು, 2017 ನ್ನು ಜಾರಿಗೊಳಿಸಲಾಗಿರುತ್ತದೆ. ಸದರಿ ತಿದ್ದುಪಡಿ ನಿಯಮಗಳಲ್ಲಿ ವಿದೇಶದಿಂದ ಮರಳು ಆಮದು ಮಾಡಿಕೊಳ್ಳಲು ವಿದೇಶಿ ಮರಳು ಆಮದುದಾರರ ನೋಂದಣಿಗೆ ಅವಕಾಶ ಕಲ್ಪಿಸಲಾಗಿರುತ್ತದೆ.<br>ಅದರಂತೆ, ವಿದೇಶದಿಂದ ಮರಳು ಆಮದು ಮಾಡಿಕೊಳ್ಳುವ 9 ಸಂಸ್ಥೆಗಳಿಗೆ ನೋಂದಣಿ ಮಾಡಿಕೊಡಲಾಗಿರುತ್ತದೆ.<br>ನೋಂದಾಯಿತ ಮರಳು ಆಮದುದಾರರ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br>ವಿದೇಶದಿಂದ ಮರಳು ಆಮದು ಮಾಡಿಕೊಂಡ ಸಂಸ್ಥೆಗಳು ಹಾಗೂ ಸದರಿ ಸಂಸ್ಥೆಗಳು ಅಮದು ಮಾಡಿಕೊಂಡ ಮರಳಿನ ಪ್ರಮಾಣದ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ) | ಮರಳು ಖರೀದಿಗೆ ಸರ್ಕಾರ ಖರ್ಚು ಮಾಡಿದ ಹಣ ಎಷ್ಟು; | ಆಮದು ಮಾಡಿಕೊಂಡ ಮರಳಿಗೆ ಸರ್ಕಾರದಿಂದ ಯಾವುದೇ ಮೊತ್ತವನ್ನು ಪಾವತಿಸಿರುವುದಿಲ್ಲ. ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2017 ರ ನಿಯಮ 31-ZF ರಂತೆ |

....2

| | | |
|---|---|---|
| | | ವಿದೇಶದಿಂದ ಮರಳನ್ನು ಆಮದು ಮಾಡಿಕೊಂಡು ಸಾರ್ವಜನಿಕರಿಗೆ ಪೂರೈಸುವ ಸಂಬಂಧ ಆಮದುದಾರರ ನೋಂದಣಿಯನ್ನು ಸರ್ಕಾರಿ ಸ್ವಾಮದ ಸಂಸ್ಥೆಯಾದ ಮೆ\|\| ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ (MSIL) ಇವರಿಗೆ ನೀಡಲಾಗಿರುತ್ತದೆ.<br>ಸದರಿ ಸಂಸ್ಥೆಯು 2017-18 ನೇ ಸಾಲಿನಲ್ಲಿ ರೂ. 22.90 ಕೋಟಿಗಳ ಮೊತ್ತದ 1,04,062 ಮೆಟ್ರಿಕ್ ಟನ್ ಮರಳನ್ನು ಮಲೇಶಿಯಾದಿಂದ ಆಮದು ಮಾಡಿ ಕೊಂಡಿದ್ದು, ಈ ಪೈಕಿ ರೂ.14.52 ಕೋಟಿಗಳನ್ನು ಮುಂಗಡವಾಗಿ ಆಮದು ಪೂರೈಕೆದಾರನಿಗೆ ಪಾವತಿಸಿರುತ್ತಾರೆ. |
| ಈ. | ಈ ಮರಳನ್ನು ಎಲ್ಲಿ ದಾಸ್ತಾನು ಮಾಡಲಾಗಿದೆ. ಮರಳು ಮಾರಾಟದಿಂದ ಬಂದಿರುವ ಹಣ ಎಷ್ಟು? | ಮೆ\|\| ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್ (MSIL) ಇವರು ಆಂಧ್ರ ಪ್ರದೇಶದ ಕೃಷ್ಣಪಟ್ಟಣಂ ಬಂದರಿನಲ್ಲಿ ಮತ್ತು ಬಿಡದಿ ಸ್ಟಾಕ್‌ಯಾರ್ಡ್‌ನಲ್ಲಿ ದಾಸ್ತಾನು ಮಾಡಿರುತ್ತಾರೆ.<br>ಆಕಾರ್ ಎಂಟರ್‌ಪ್ರೈಸಸ್ ಮತ್ತು ಟಿಎಂಟಿ ಎಂಟರ್ ಪ್ರೈಸಸ್ ಇವರು ನವಮಂಗಳೂರು ಬಂದರಿನಲ್ಲಿ ದಾಸ್ತಾನು ಮಾಡಿರುತ್ತಾರೆ.<br>ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2017 ರ ನಿಯಮ 31-ZL ರಂತೆ ಪ್ರತಿ ಮೆಟ್ರಿಕ್ ಟನ್ ವಿದೇಶಿ ಮರಳಿಗೆ ರೂ.60/- ನ್ನು ಸಂಸ್ಕರಣಾ ಶುಲ್ಕವಾಗಿ ಸಂಗ್ರಹಿಸಲು ಅವಕಾಶ ಕಲ್ಪಿಸಿದ್ದು, ಅದರಂತೆ ಇಲ್ಲಿಯವರೆಗೂ ಒಟ್ಟು ರೂ. 74.85 ಲಕ್ಷಗಳು ಸರ್ಕಾರಕ್ಕೆ ಸಂದಾಯವಾಗಿರುತ್ತದೆ.<br>ಸಾರ್ವಜನಿಕರಿಗೆ ಪೂರೈಕೆಯಾದ ಆಮದು ಮರಳಿನ ಪ್ರಮಾಣ ಮತ್ತು ಸರ್ಕಾರಕ್ಕೆ ಪಾವತಿಯಾದ ಮೊತ್ತದ ವಿವರಗಳನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ.<br>ಮುಂದುವರೆದು, ಸರ್ಕಾರಿ ಸಂಸ್ಥೆಯಾದ ಮೆ\|\| ಎಂ.ಎಸ್.ಐ.ಎಲ್ ವತಿಯಿಂದ ಇದುವರೆಗೂ 14,759 ಮೆಟ್ರಿಕ್ ಟನ್ ವಿದೇಶಿ ಮರಳನ್ನು ಮಾರಾಟ ಮಾಡಿದ್ದು ರೂ.3.95 ಕೋಟಿಗಳ ಮೊತ್ತವನ್ನು ಮರಳು ಮಾರಾಟದಿಂದ ಸಂಗ್ರಹಿಸಲಾಗಿರುತ್ತದೆ. |

ಸಂಖ್ಯೆ ಸಿಐ-ಎಂಎಂಎನ್ /55/2022

Halappa B

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.

# Details of IRS Certificates issued to Import the sand from the other countries

| Sl. No. | Name of the Importer | Date of Grant | Name of the sand Exporting Country |
|---|---|---|---|
| 1 | Mysore Sales International Ltd<br>MSIL House, 36,<br>Cunningham Road,<br>Bangalore - 560 052.<br>Contact No.- 91 80 22264021-25 | 03.01.2018 | Malaysia |
| 2 | Integrated Service Point Pvt. Ltd.,<br>No.6-C, 6th Floor, Gaiety Palace,<br>Door #1/L, Blackers Road,<br>Chennai - 600 002.<br>Contact No - 98407 97064/93828 99099 | 06.03.2018 | Malaysia |
| 3 | Bluemax International Pvt. Ltd.<br>No. 27/19, 9th Main,<br>Sadashiva Nagar,<br>Bangalore - 560 080.<br>Contact No.- 9686437765 / 9845234007 | 23.04.2018 | Malaysia & Philippines |
| 4 | Transpro Engineering Pvt. Ltd.<br>No.45, MGM Flats,<br>Soundarajan Street.<br>T. Nagar,<br>Chennai - 600 017.<br>Contact No. - 97877 07913. | 10.05.2018 | Malaysia, Myanmar, Combodia & Vietnam |
| 5 | CHETTINAD LOGISTRICS PRIVATE LIMITED<br>Corporate Office: 6th Floor,<br>"Rani Seethai Halli Building"<br>603, Anna Salai,<br>CHENNAI-600 006<br>Contact No.- +91 44282 94433<br>4298 8603 | 07.07.2018 | Malaysia & South East Asian Countries |
| 6 | TMT Enterprises<br>C-40, Second Avenue,<br>Anna Nagar West,<br>CHENNAI-600 040<br>Contact No.-98840 85368/98652 04735 | 07.05.2018 | Malaysia |
| 7 | D2S RESOURCES Pvt. Ltd.<br># 1/123, Theni Main Road,<br>S.S. Puram, Aundipatti, Theni,<br>TAMILNADU<br>Contact No.- 99629 21414 | 20.04.2018 | Malaysia |

| Sl. No. | Name of the Importer | Date of Grant | Name of the sand Exporting Country |
|---|---|---|---|
| 8 | SMK Business Care Private Limited<br>No. 3A, 3rd Floor,<br>Ambercest Apartment,<br>No. 37, Pantheon Road, Egmore,<br>Chennai-600 008<br>Contact No.: 96327 33355 | 24.11.2019 | Malaysia |
| 9 | Aakar Enterprises<br>No. 4, Sattana Naicken Street,<br>Inside Nehru Timber Market,<br>Choolai,<br>Chennai - 600 112.<br>Contact No. - 2669 0011 | 19.06.2020 | Malaysia |

Deputy Director (Min. Admn)
Dept. of Mines & Geology
Bangalore-560001

ಅನುಬಂಧ-2

## ವಿದೇಶಿ ಆಮದು ಮರಳು ಸಾಗಾಣಿಕೆಯಿಂದ ಸಂಗ್ರಹಿಸಲಾದ ಮೊತ್ತದ ವಿವರಗಳು.

| ಕ್ರ. ಸಂ. | ಮರಳು ಆಮದುದಾರರ ಹೆಸರು | ಆಮದು ಮಾಡಿಕೊಂಡಿರುವ ಮರಳಿನ ಪ್ರಮಾಣ (ಮೆ.ಟನ್ ಗಳಲ್ಲಿ) | ಸಾರ್ವಜನಿಕರಿಗೆ ಪೂರೈಕೆ ಮಾಡಲಾದ ಮರಳಿನ ಪ್ರಮಾಣ (ಮೆ.ಟನ್ ಗಳಲ್ಲಿ) | ಆಮದು ಮರಳಿಗೆ ಸಂಬಂಧಪಟ್ಟಂತೆ ಸಂಗ್ರಹಿಸಲಾದ ಶುಲ್ಕ (ಪ್ರತಿ ಮೆ.ಟನ್ ಗೆ ರೂ. 60/- ರಂತೆ) | ಷರಾ |
|---|---|---|---|---|---|
| 1 | ಇಂಟಿಗ್ರೇಟೆಡ್ ಸರ್ವೀಸ್ ಪಾಯಿಂಟ್ ಪ್ರೈ. ಲಿ. | 57876 | 57876 | 3472561.20 | ಸದರಿ ಸಂಸ್ಥೆಯವರು ವಿದೇಶದಿಂದ ಆಮದಾದ ಮರಳನ್ನು ಸಾರ್ವಜನಿಕ ಕಾಮಗಾರಿಗಳಿಗೆ ಪೂರೈಸಿರುತ್ತಾರೆ. |
| 2 | ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿ. | 1,03,872 | 14759 | 885540.00 | ಆಮದು ಮಾಡಿಕೊಳ್ಳಲಾದ ಒಟ್ಟು 1,03,872 ಮೆ.ಟನ್ ಮರಳಿನ ಪ್ರಮಾಣದಲ್ಲಿ 8,377 ಮೆ.ಟನ್ ಬಿಡದಿ ಸ್ಟಾಕ್ ಯಾರ್ಡ್ ನಲ್ಲಿ ತಂದು ಸಂಗ್ರಹಿಸಿ, ಈ ಪೈಕಿ 7,655 ಮೆ.ಟನ್ ಮರಳನ್ನು ಸಾರ್ವಜನಿಕರಿಗೆ ಪೂರೈಕೆ ಮಾಡಲಾಗಿರುತ್ತದೆ. ಉಳಿದ 95,495 ಮೆ.ಟನ್ ಮರಳು ಆಂಧ್ರ ಪ್ರದೇಶದ ಕೃಷ್ಣಪಟ್ಟಣಂ ಪೋರ್ಟ್ ನಲ್ಲಿ ದಾಸ್ತಾನಿರುತ್ತದೆ. |
| 3 | ಆಕಾರ್ ಎಂಟರ್ ಪ್ರೈಸಸ್ | 47871 | 21344 | 0.00 | ಮಾನ್ಯ ಉಚ್ಚ ನ್ಯಾಯಾಲಯವು ದಿ: 11.02.2019 ರಂದು ರಿಟ್ ಅರ್ಜಿ ಸಂ. 38905/2018 ಕ್ಕೆ ಸಂಬಂಧಪಟ್ಟಂತೆ ನೀಡಿರುವ ಮಧ್ಯಂತರ ಆದೇಶಂತೆ ಶ್ರೀ. ಆಕಾರ್ ಎಂಟರ್ ಪ್ರೈಸಸ್ ರವರು ರೂ. 30.00 ಲಕ್ಷಗಳ ಠೇವಣಿ ಹಾಗೂ ರೂ.30.00 ಲಕ್ಷಗಳ ಬ್ಯಾಂಕ್ ಗ್ಯಾರಂಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು, ನ್ಯಾಯಾಲಯದ ಆದೇಶದಂತೆ, ಸದರಿಯವರಿಗೆ ಮರಳು ಸಾಗಾಣಿಕೆ ಪರವಾನಿಗೆಯನ್ನು ನೀಡಲಾಗುತ್ತಿದೆ. ಸದರಿ ಮರಳನ್ನು ನವ ಮಂಗಳೂರು ಪೋರ್ಟ್ ನಲ್ಲಿ ದಾಸ್ತಾನಿರುತ್ತದೆ. |
| 4 | ಟಿ.ಎಂ.ಟಿ. ಎಂಟರ್ ಪ್ರೈಸಸ್ | 52129 | 0 | 3127740.00 | ಸದರಿ ಸಂಸ್ಥೆಯವರು ಆಕಾರ್ ಎಂಟರ್ ಪ್ರೈಸಸ್ ನಿಂದ ವಿದೇಶದಿಂದ ಆಮದು ಮಾಡಿಕೊಂಡಿರುವ (ನವಮಂಗಳೂರು ಪೋರ್ಟ್ ನಲ್ಲಿರುವ) ಅಂದಾಜು 52,129 ಮೆ.ಟನ್ ಮರಳನ್ನು ಖರೀದಿ ಮಾಡಿ ಇಲಾಖೆಗೆ ಪ್ರತಿ ಮೆ.ಟನ್ ರೂ. 60/- ರಂತೆ ಒಟ್ಟು ರೂ. 31.27 ಲಕ್ಷ ಮೊತ್ತವನ್ನು ಪಾವತಿಸಿ, ಸಾಗಾಣಿಕೆ ಮಾಡಿರುವುದಿಲ್ಲ. |
| **Total** | | **261748** | **93979** | **7485841.20** | |

CI/MMN/55/2022

Deputy Director (Min. Admn)
Dept. of Mines & Geology
Bangalore-560001